# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 79 |
| ಸದಸ್ಯರ ಹೆಸರು | : | ಶ್ರೀ ಎಂ.ಎ ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 21.09.2020 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯಮಂತ್ರಿಯವರು ಹಾಗೂ ಉನ್ನತ ಶಿಕ್ಷಣ, ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು. |

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯದಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಆಧಾರಿತ ಎಷ್ಟು ಸಂಸ್ಥೆಗಳಿವೆ; (ವಿವರ ನೀಡುವುದು) ಈ ಸಂಸ್ಥೆಗಳಲ್ಲಿ ಸರೋಜಿನಿ ಮಹಿಷಿ ವರದಿಯಂತೆ ಸ್ಥಳೀಯರಿಗೆ ಉದ್ಯೋಗಾವಕಾಶಗಳನ್ನು ನೀಡಲಾಗುತ್ತಿದೆಯೇ; ಇಲ್ಲದಿದ್ದಲ್ಲಿ, ಸರ್ಕಾರವು ಈ ಸಂಬಂಧ ಕೈಗೊಂಡಿರುವ ಕ್ರಮಗಳೇನು; (ವಿವರ ನೀಡುವುದು) | ರಾಜ್ಯದಾದ್ಯಂತ ಸುಮಾರು 5500 ಮಾಹಿತಿ ತಂತ್ರಜ್ಞಾನ ಹಾಗೂ ಅಂದಾಜು 300 ಜೈವಿಕ ತಂತ್ರಜ್ಞಾನ ಆಧಾರಿತ ಸಂಸ್ಥೆ/ಕಂಪನಿಗಳು ಕಾರ್ಯ ನಿರ್ವಹಿಸುತ್ತಿವೆ.<br>ಸದರಿ ಸಂಸ್ಥೆಗಳು ಆಯಾ ಸಂಸ್ಥೆಗಳಲ್ಲಿರುವ ಮಾನವ ಸಂಪನ್ಮೂಲ ನೇಮಕಾತಿ ನೀತಿಯನ್ವಯ ತಮ್ಮ ನೇಮಕಾತಿಗಳನ್ನು ಮಾಡಿಕೊಳ್ಳುತ್ತವೆ. ಆದಾಗ್ಯೂ, ರಾಜ್ಯ ಸರ್ಕಾರವು ಸೃಜಿಸಿರುವ ಏಕಗವಾಕ್ಷಿ ಅನುಮೋದನಾ ಸಮಿತಿಯಲ್ಲಿ ಅನುಮೋದನೆಗೊಂಡ ಯೋಜನಾ ಪ್ರವರ್ತಕರಿಗೆ ಸರೋಜಿನಿ ಮಹಿಷಿ ವರದಿಯನ್ವಯ ಕನ್ನಡಿಗರಿಗೆ ಉದ್ಯೋಗ ನೀಡುವಂತೆ ಸೂಚಿಸಲಾಗುತ್ತಿದೆ. |
| ಆ) ಬೆಂಗಳೂರು ನಗರ ಹೊರತು ಪಡಿಸಿ, ರಾಜ್ಯದ ಇತರೆ ಜಿಲ್ಲೆಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕೇಂದ್ರಗಳನ್ನು ಸ್ಥಾಪನೆ ಮಾಡಲು ಸರ್ಕಾರ ಉದ್ದೇಶಿಸಿದೆಯೇ; ಉದ್ದೇಶಿಸಿದ್ದಲ್ಲಿ; ಯಾವ ಯಾವ ಪ್ರದೇಶಗಳಲ್ಲಿ ಈ ಕೇಂದ್ರಗಳನ್ನು ತೆರೆಯಲಾಗುವುದು; (ವಿವರ ನೀಡುವುದು) | ಹೌದು, ಬೆಂಗಳೂರು ನಗರ ಹೊರತು ಪಡಿಸಿ ರಾಜ್ಯದ ಇತರೆ ಜಿಲ್ಲೆಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಲಯಗಳ ಅಭಿವೃದ್ಧಿಗಾಗಿ ಈ ಕೆಳಕಂಡ ಪ್ರದೇಶಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕೇಂದ್ರಗಳನ್ನು ಸ್ಥಾಪನೆ ಮಾಡಲಾಗಿರುತ್ತದೆ:<br>**ಮಾಹಿತಿ ತಂತ್ರಜ್ಞಾನ ವಲಯ**:<br>• ರಾಜ್ಯದ 18 ಜಿಲ್ಲೆಗಳಲ್ಲಿರುವ ಕಾಲೇಜು/ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಗೆ ತಮ್ಮ ನಾವೀನ್ಯತೆ ಹಾಗೂ ಆವಿಷ್ಕಾರಗಳನ್ನು ಅಭಿವೃದ್ಧಿಪಡಿಸಲು ನ್ಯೂ ಏಜ್ ಇನ್ಕ್ಯುಬೇಷನ್ ಸೆಂಟರ್ ಅನ್ನು ಸ್ಥಾಪಿಸಲಾಗಿದೆ. ಅಲ್ಲದೇ, ಇನ್ನೂ 9 ಕಾಲೇಜುಗಳಲ್ಲಿ ಸದರಿ ಸೆಂಟರ್‌ಗಳನ್ನು ಸ್ಥಾಪಿಸುವ ಪ್ರಕ್ರಿಯೆಯು ಜಾರಿಯಲ್ಲಿದೆ.<br>• ರಾಜ್ಯದ ಹುಬ್ಬಳ್ಳಿ, ಶಿವಮೊಗ್ಗ ಹಾಗೂ ಕಲ್ಬುರ್ಗಿ ಜಿಲ್ಲೆಗಳಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್ ಅನ್ನು ಸ್ಥಾಪಿಸಲಾಗಿರುತ್ತದೆ.<br>• ಮೈಸೂರಿನ ಹೆಬ್ಬಾಳದ ಹೂಟ್ಟಗಳ್ಳಿಯಲ್ಲಿ ಎಲೆಕ್ಟ್ರಾನಿಕ್ಸ್ ಉದ್ಯಮಕ್ಕೆ ಅನುಕೂಲ ವಾಗುವಂತೆ ಬ್ರೌನ್‌ಫೀಲ್ಡ್ ಇಎಸ್‌ಡಿಎಮ್ ಕ್ಲಸ್ಟರ್ [Brownfield ESDM Cluster] ನ್ನು ಸ್ಥಾಪಿಸಲಾಗಿದೆ.<br>• ಮಂಗಳೂರು, ಬೆಳಗಾವಿ, ಮೈಸೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ತಂತ್ರಜ್ಞಾನ ಕಂಪನಿಗಳ ಉಪಯೋಗಕ್ಕಾಗಿ ಐಕೆಪಿ ವತಿಯಿಂದ ಕೆ-ಟೆಕ್ ಇನ್ನೋವೇಷನ್ ಹಬ್ ಹಾಗೂ ಸರ್ವಬಳಕೆಯ ಸಲಕರಣೆಗಳ ಸೌಲಭ್ಯ {Common Instrumentation Facility (CIF)} ವನ್ನು ಸರ್ಕಾರದ ವತಿಯಿಂದ ಸ್ಥಾಪಿಸಲಾಗಿದೆ.<br>• ಹುಬ್ಬಳ್ಳಿಯಲ್ಲಿ ವಿಎಲ್‌ಎಸ್‌ಐ ಇನ್ಕ್ಯುಬೇಟರ್ ಸೆಂಟರ್[VLSI Incubator Center] ಮತ್ತು ಇಎಸ್‌ಡಿಎಮ್ ಬ್ರೌನ್‌ಫೀಲ್ಡ್ |

| ಪ್ರಶ್ನೆ | ಉತ್ತರ |
|---|---|
| | ಕ್ಲಸ್ಟರ್ [ESDM Brownfield Cluster] ನ್ನು ಸ್ಥಾಪಿಸಲಾಗಿದೆ.<br><br>**ಜೈವಿಕ ತಂತ್ರಜ್ಞಾನ ವಲಯ:**<br>• ಬಾಗಲಕೋಟೆಯಲ್ಲಿ ಸೆಂಟರ್ ಫಾರ್ ಬಯೋಟೆಕ್ನಾಲಜೀ ರಿಸರ್ಚ್ [Centre for Biotech Research) ಕೇಂದ್ರವನ್ನು ಹಾಗೂ CIF ಕೇಂದ್ರವನ್ನು ಸಹ ಸ್ಥಾಪಿಸಲಾಗಿದೆ.<br>• ಧಾರವಾಡದಲ್ಲಿ ಅಗ್ರಿ ಇನ್ನ್ಯೂಬೇಷನ್ ಸೆಂಟರ್ [Agri-Innovation Centre]ನ್ನು ಹಾಗೂ CIF ಕೇಂದ್ರವನ್ನು ಸ್ಥಾಪಿಸಲಾಗಿದೆ.<br>• ಮೈಸೂರಿನಲ್ಲಿ CFTRI ಆವರಣದಲ್ಲಿ Nutra Nutri Phyto Pharmaceutical (N2P2) Incubation ಹಾಗೂ Common Instrumentation Facility ಕೇಂದ್ರವನ್ನು ಸ್ಥಾಪಿಸಲಾಗಿದೆ. |
| ಇ) ಬೆಂಗಳೂರು ನಗರ ಹೊರತುಪಡಿಸಿ ರಾಜ್ಯದ ಇತರೆ ಭಾಗಗಳಲ್ಲಿ ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಕೇಂದ್ರಗಳನ್ನು ಸ್ಥಾಪನೆ ಮಾಡಲು ಖಾಸಗಿ ಕಂಪನಿಗಳಿಗೆ ಸರ್ಕಾರ ಒದಗಿಸುತ್ತಿರುವ ಸವಲತ್ತುಗಳೇನು? (ವಿವರ ನೀಡುವುದು) | ಬೆಂಗಳೂರು ನಗರ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಗಳನ್ನು ಹೊರತುಪಡಿಸಿ, ರಾಜ್ಯದ ಇತರೆ ಭಾಗಗಳಲ್ಲಿ ಮಾಹಿತಿ ತಂತ್ರಜ್ಞಾನ ಕೇಂದ್ರಗಳನ್ನು ಸ್ಥಾಪನೆ ಮಾಡಲು ಸರ್ಕಾರವು ದಿನಾಂಕ:07-09-2020 ರಂದು ಪ್ರಕಟಿಸಿದ ಹೊಸ **ಮಾಹಿತಿ ತಂತ್ರಜ್ಞಾನ ನೀತಿ 2020-2025** ರನ್ವಯ ಕೆಳಕಂಡ ಸವಲತ್ತುಗಳನ್ನು ಕಲ್ಪಿಸಲಾಗಿರುತ್ತದೆ :-<br><br>**ಮೂಲಸೌಕರ್ಯಾಭಿವೃದ್ಧಿ**<br>• ಐಟಿ ಹಬ್ ಗಳು/ಕ್ಲಸ್ಟರ್ ಗಳ ಅಭಿವೃದ್ಧಿಗಾಗಿ ಸ್ಥಿರ ಹೂಡಿಕೆಗಳ ಶೇ.20 ರವರೆಗಿನ ಆರ್ಥಿಕ ಬೆಂಬಲ.<br>• ಸಂಘಟಿತ ಕಾರ್ಯಸ್ಥಳಗಳು / ಪ್ಲಗ್ & ಪ್ಲೇ ಮೂಲಸೌಕರ್ಯಗಳ ಅಭಿವೃದ್ಧಿಗಾಗಿ ಸ್ಥಿರ ಹೂಡಿಕೆಗಳ ಶೇ.33 ರವರೆಗಿನ ಆರ್ಥಿಕ ಬೆಂಬಲ.<br>• ಒಂದು ಚ.ಅಡಿಗೆ ರೂ.10 ರಂತೆ ಗರಿಷ್ಠ ರೂ.3 ಲಕ್ಷದವರೆಗೆ ಗುತ್ತಿಗೆ/ಬಾಡಿಗೆಯ ಮರುಪಾವತಿ.<br>• ಮೈಸೂರು, ಹುಬ್ಬಳ್ಳಿ-ಧಾರವಾಡ ಮತ್ತು ಮಂಗಳೂರಿನಲ್ಲಿ ಶೇ.75 ರಷ್ಟು ಹಾಗೂ ಬೆಂಗಳೂರಿನ ಹೊರತಾಗಿ ಇತರೆ ಪ್ರದೇಶಗಳಿಗೆ ಶೇ.100 ರಷ್ಟು ಮುದ್ರಾಂಕ ಶುಲ್ಕದಿಂದ ವಿನಾಯಿತಿ<br>• ವಾಣಿಜ್ಯ ವಿದ್ಯುಚ್ಛಕ್ತಿ ದರದ ಬದಲಾಗಿ ಕೈಗಾರಿಕಾ ವಿದ್ಯುಚ್ಛಕ್ತಿ ದರದ ಅನ್ವಯ.<br><br>**ಮಾರುಕಟ್ಟೆ ಅಭಿವೃದ್ಧಿ**<br>• ಗುಣಮಟ್ಟ ಪ್ರಮಾಣೀಕರಣಕ್ಕೆ ತಗಲಿದ ವೆಚ್ಚದ ಶೇ.50 ರಷ್ಟು, ಗರಿಷ್ಠ ರೂ.6 ಲಕ್ಷದವರೆಗೆ ಮರುಪಾವತಿ.<br>• ಮಾರುಕಟ್ಟೆ ವೆಚ್ಚಕ್ಕೆ ತಗಲಿದ ವಾಸ್ತವಿಕ ವೆಚ್ಚದ ಶೇ.30 ರಷ್ಟು, ಒಂದು ಸಂಸ್ಥೆಗೆ ರೂ.5 ಲಕ್ಷದವರೆಗೆ ಮರುಪಾವತಿ.<br><br>**ಸಂಶೋಧನೆ ಮತ್ತು ಅಭಿವೃದ್ಧಿ ಬೆಂಬಲ**<br>• ಸಂಶೋಧನೆ ಮತ್ತು ಅಭಿವೃದ್ಧಿ ಬೆಂಬಲ, ಅದರಲ್ಲೂ ನಿರ್ದಿಷ್ಟವಾಗಿ ಉದಯೋನ್ಮುಖ ಹಾಗೂ 5ಜಿ ತಂತ್ರಜ್ಞಾನಗಳಿಗೆ ಒಟ್ಟು ಸಂಶೋಧನೆ ಮತ್ತು ಅಭಿವೃದ್ಧಿ ಯೋಜನಾ ವೆಚ್ಚದ ಶೇ.33 ರಷ್ಟು ಅಥವಾ ರೂ. ಒಂದು ಕೋಟಿಯವರೆಗೆ, ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಬೆಂಬಲ.<br>• ಸ್ಥಳೀಯ ಪೇಟೆಂಟ್ ಗಳಿಗೆ ಗರಿಷ್ಠ ರೂ.2 ಲಕ್ಷದಂತೆ, |

| ಪ್ರಶ್ನೆ | ಉತ್ತರ |
| --- | --- |
| | ಹಾಗೂ ಅಂತರರಾಷ್ಟ್ರೀಯ ಪೇಟೆಂಟ್ ಗಳಿಗೆ ಗರಿಷ್ಠ ರೂ.10 ಲಕ್ಷದಂತೆ ಐಪಿ/ಪೇಟೆಂಟ್ ಗೆ ತಗಲಿದ ವೆಚ್ಚದ ಮರುಪಾವತಿ.<br><br>**<u>ಕಾರ್ಮಿಕ ಸಂಬಂಧಿತ ಪ್ರೋತ್ಸಾಹಕಗಳು ಮತ್ತು ರಿಯಾಯಿತಿಗಳು</u>**<br>• ಒಬ್ಬ ಸಿಬ್ಬಂದಿಗೆ ಒಂದು ತಿಂಗಳಿಗೆ ರೂ.2000 ರಂತೆ ಎರಡು ವರ್ಷದವರೆಗೆ ಭವಿಷ್ಯ ನಿಧಿ / ಕಾರ್ಮಿಕರ ರಾಜ್ಯ ವಿಮೆಯ ಮರುಪಾವತಿ<br>• ಕರ್ನಾಟಕ ಕೈಗಾರಿಕಾ ಉದ್ಯೋಗ (ಸ್ಥಾಯಿ ಆದೇಶಗಳು) ನಿಯಮಾವಳಿ, ಯಿಂದ ವಿನಾಯಿತಿ.<br>• ಕಾರ್ಮಿಕ ನಿಯಮಾವಳಿಗಳಡಿಯಲ್ಲಿ ಸ್ವಯಂ-ಪ್ರಮಾಣೀಕರಣಕ್ಕೆ ಸಲ್ಲಿಸಿಕೊಳ್ಳಲು ಅನುಮತಿ ನೀಡಿದೆ.<br><br>**<u>ಜೈವಿಕ ತಂತ್ರಜ್ಞಾನ</u>**<br>ಜೈವಿಕ ತಂತ್ರಜ್ಞಾನ ವಲಯಕ್ಕಾಗಿ ಸರ್ಕಾರವು ಪ್ರಕಟಿಸಿರುವ **ಜೈವಿಕ ತಂತ್ರಜ್ಞಾನ ನೀತಿ 3.0** ರಲ್ಲಿ ರಾಜ್ಯದಾದ್ಯಂತ ಸ್ಥಾಪಿಸುವ ಜೈವಿಕ ತಂತ್ರಜ್ಞಾನ ಕಂಪನಿಗಳಿಗೆ ಈ ಕೆಳಕಂಡ ಹಣಕಾಸಿನ ಪ್ರೋತ್ಸಾಹಕಗಳು ಹಾಗೂ ರಿಯಾಯಿತಿಗಳನ್ನು ಕಲ್ಪಿಸಲಾಗಿರುತ್ತದೆ:-<br><br>• ಉಪಘಟಕಕ್ಕೆ ಸಬ್ಸಿಡಿ.<br>• ರೂ.1 ಲಕ್ಷದವರೆಗೆ ಯೋಜನೆಯ ಕಾರ್ಯಯೋಜನೆ ತಯಾರಿಕೆಯ ವೆಚ್ಚದ ಮರುಪಾವತಿ.<br>• ಸಂಶೋಧನಾಭಿವೃದ್ಧಿ ಘಟಕಗಳಿಗೆ ವಿದ್ಯುತ್ ದರಗಳಲ್ಲಿ ರಿಯಾಯಿತಿ.<br>• ತಂತ್ರಜ್ಞಾನ ಉನ್ನತೀಕರಣಕ್ಕಾಗಿ ಪಡೆದುಕೊಂಡ ಗರಿಷ್ಠ ರೂ.50.00 ಲಕ್ಷಗಳವರೆಗಿನ ಸಾಲದ ಬಡ್ಡಿಯಲ್ಲಿ ಸಬ್ಸಿಡಿ.<br>• ISO/BIS/NABL/GMP/GLP ಪ್ರಮಾಣೀಕರಣಗಳನ್ನು ಪಡೆಯಲು ಆರ್ಥಿಕ ಸಹಾಯ.<br>• ಭಾರತದಲ್ಲಿ ಮತ್ತು ವಿದೇಶದಲ್ಲಿ ಪೇಟೆಂಟ್ ನೋಂದಣಿಗಾಗಿ ಆರ್ಥಿಕ ಸಹಾಯ.<br>• ಅಂತಾರಾಷ್ಟ್ರೀಯ ಮಾರ್ಕೆಟಿಂಗ್ ಪ್ರಚುರ ಕಾರ್ಯಕೈಗೊಳ್ಳಲು ಮಾರ್ಕೆಟಿಂಗ್ ಪ್ರೋತ್ಸಾಹಕ. |

**(ಐಟಿಬಿಟಿ 44 ಎಲ್‌ಸಿಎಂ 2020)**

**(ಡಾ. ಅಶ್ವಥ್ ನಾರಾಯಣ ಸಿ.ಎನ್)**
ಉಪಮುಖ್ಯಮಂತ್ರಿ ಹಾಗೂ ವಿದ್ಯುನ್ಮಾನ, ಮಾಹಿತಿ
ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ
ಮತ್ತು ತಂತ್ರಜ್ಞಾನ ಸಚಿವರು